ಸಂಸ್ಥಾಪಕರು: ಪ್ರೊ ಎಂ.ವಿ. ಸೀತಾರಾಮಯ್ಯ



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

| ಸಂಪುಟ: ೦೨ ಸಂಚಿಕೆ: ೧೧ | ಫೆಬ್ರವರಿ ೨೦೧೬ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 02 Issue 11 | February 2016 | Pages - 8 | A. Sub. - Rs. 20/- | Editor : Sri. B.R. Ravindranath |




**ಚಂದಾ ವಿವರಗಳು**

**ವಾರ್ಷಿಕ ಚಂದಾ**
**ರೂ. ೨೦/–**
**ಐದು ವರ್ಷಗಳ ಚಂದಾ**
**ರೂ. ೧೦೦/–**

ವಿಳಾಸ

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
**ಸ್ಥಾಪನೆ : ೦೬–೦೫–೧೯೭೯**
**ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ**
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com

## ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಡಿಸೆಂಬರ್2015 – ಜನವರಿ 2016 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

### ಶ್ರೀ ಸಾಹಿತ್ಯ ಪ್ರಶಸ್ತಿ ಪ್ರದಾನ (3–1–2016)



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಪ್ರಮುಖ ಕಾರ್ಯಕ್ರಮವಾದ ರೂ. ಒಂದು ಲಕ್ಷ ಮೊತ್ತದ ಶ್ರೀ ಸಾಹಿತ್ಯ ಪ್ರಶಸ್ತಿಯನ್ನು ಬಿಎಂಶ್ರೀ ಅವರ ಜನ್ಮದಿನದಂದೇ ವಿದ್ವಾಂಸ ಪ್ರೊ. ಹಂಪ ನಾಗರಾಜಯ್ಯ ಅವರು ಪ್ರಸಿದ್ಧ ಕವಿ ಡಾ. ಸಿದ್ದಲಿಂಗಯ್ಯ ಅವರಿಗೆ ನ್ಯಾ.ಎ.ಜೆ. ಸದಾಶಿವ ಅವರ ಅಧ್ಯಕ್ಷತೆಯಲ್ಲಿ ನೀಡಿದರು. ಈ ಪ್ರಶಸ್ತಿಯುನ್ನು ಸ್ಥಾಪಿಸಿರುವ ಶ್ರೀಮತಿ ಕಮಲಿನಿ ಶಾ ಬಾಲೂರಾವ್ ಅವರು ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಅಧ್ಯಕ್ಷ ಪ್ರೊ. ಎಂ.ಹೆಚ್. ಕೃಷ್ಣಯ್ಯ ಅವರು ಉಪಸ್ಥಿತರಿದ್ದರು.

ಕಾರ್ಯಕ್ರಮವನ್ನು ಕನ್ನಡ ಗೀತೆಗಳ ಗಾಯನದೊಂದಿಗೆ ಪ್ರಾರಂಭಿಸಲಾಯಿತು. ಕುಮಾರಿ ದೀಪ್ತಿ ಅವರು ಕನ್ನಡದ ಪ್ರಸಿದ್ಧ ಕವಿಗಳ ಕವಿತೆಗಳನ್ನು ಸುಶ್ರಾವ್ಯವಾಗಿ ಹಾಡಿದರು. ಪ್ರಶಸ್ತಿ ಕಾರ್ಯಕ್ರಮದ ಆರಂಭದಲ್ಲಿ ಬಿ.ಎಂ.ಶ್ರೀ ಅವರು ರಚಿಸಿದ "ಕರುಣಾಳು ಬಾ ಬೆಳಕೆ"ಕವಿತೆಯನ್ನು ಹಾಡಿದರು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷ ಪ್ರೊ. ಪಿ.ವಿ. ನಾರಾಯಣ ಅವರು ಈ ಪ್ರಶಸ್ತಿಯ ಹಿನ್ನಲೆ ಹಾಗೂ ಪ್ರತಿಷ್ಠಾನದ ಚಟುವಟಿಕೆಗಳನ್ನು ವಿವರಿಸಿ ಎಲ್ಲರನ್ನೂ ಸ್ವಾಗತಿಸಿದರು. ಗೌರವ ಕಾರ್ಯದರ್ಶಿ ಪ್ರೊ.ಅಬ್ದುಲ್ ಬಶೀರ್ ಪ್ರಶಸ್ತಿ ವಾಚನ ಮಾಡಿದರು. ಪ್ರೊ.ಕಾವೆಂ. ಶ್ರೀನವಾಸಮೂರ್ತಿ ಅವರು ಅಭಿನಂದನ ನುಡಿಗಳನ್ನು ಆಡಿ ಡಾ. ಸಿದ್ದಲಿಂಗಯ್ಯ ಅವರ ಸಾಧನೆಗಳನ್ನು ಗುರುತಿಸಿದರು. ಗೌರವ ಕಾರ್ಯದರ್ಶಿ ರವೀಂದ್ರನಾಥ್ ನಿರೂಪಿಸಿದರು. ಖಜಾಂಚಿ ಶ್ರೀ ಎಂ. ಎಸ್. ರಾಮ ಪ್ರಸಾದ್ ವಂದನಾರ್ಪಣೆ ನಡೆಸಿಕೊಟ್ಟರು.



# ಸಂಪಾದಕೀಯ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸದಸ್ಯರು, ಕಾರ್ಯಕಾರಿ ಸಮಿತಿ ಸದಸ್ಯರು ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಭಿಮಾನಿಗಳ ಸಹಾಯ ಹಾಗೂ ಸಲಹೆ ಸೂಚನೆಗಳ ಬೆಂಬಲದಿಂದ ಹೊಂಗನಸು ಒಂದು ವರ್ಷವನ್ನು ಯಶಸ್ವಿಯಾಗಿ ದಾಟಿ ಎರಡನೇ ವರ್ಷಕ್ಕೆ ಕಾಲಿಡುತ್ತಿದೆ.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಾರ್ಯ ಚಟುವಟಿಕೆಗಳನ್ನು ಶೀಘ್ರವಾಗಿ ಸದಸ್ಯರು ಹಾಗೂ ಸಾಹಿತ್ಯಾಸಕ್ತರಿಗೆ ತಿಳಿಸುವ ಗುರಿಯನ್ನು ಮುಟ್ಟಲಾಗಿದೆ. ಅಂಚೆ ರಿಯಾಯಿತಿಯನ್ನು ಪಡೆದ ನಂತರ ಪ್ರತಿ ತಿಂಗಳ 30 ನೇ ದಿನಾಂಕದಂದು ಮರುತಿಂಗಳ ಹೊಂಗನಸು ಪತ್ರಿಕೆಯನ್ನು ಅಂಚೆಗೆ ಹಾಕಲು ಸಾಧ್ಯವಾಗಿದೆ. ಇದರಿಂದ ಎಲ್ಲರಿಗೂ ತಿಂಗಳ ಮೊದಲ ವಾರದಲ್ಲೇ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಕೈಗೊಂಡಿರುವ ಚಟುವಟಿಕೆಗಳ ಬಗ್ಗೆ ಚಿತ್ರಸಹಿತ ವರದಿಗಳು ಲಭ್ಯವಾಗುತ್ತವೆ. ಜೊತೆಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಆಯಾ ತಿಂಗಳಿನಲ್ಲಿ ಹಮ್ಮಿಕೊಂಡಿರುವ ಕಾರ್ಯಕ್ರಮಗಳ ವಿವರಗಳನ್ನು ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಪ್ರಕಟಣೆಗಳನ್ನೂ ಪ್ರಕಟಿಸಲಾಗುತ್ತಿದೆ. ಹೊಂಗನಸು ಕೇವಲ ಪ್ರಕಟಣೆಗಳ ಫಲಕವಾಗದೇ ಓದುಗರಿಗೆ ಜ್ಞಾನವನ್ನೂ ಹಂಚಲು ಪದಚರಿತೆ ಹಾಗೂ ಆಧುನಿಕ ವಚನಗಳನ್ನು ಪ್ರಕಟಿಸುವುದಲ್ಲದೆ ಅಕ್ಕರಗೊಟ್ಟಿಯಲ್ಲಿ ಚರ್ಚೆಯಾದ ವಿಷಯಗಳ ವಿವರಗಳನ್ನೂ ನೀಡಲಾಗುತ್ತಿದೆ.

ಈ ತಿಂಗಳಿನಿಂದ ಹೊಸ ಕಾರ್ಯಕ್ರಮ ಮಾಲೆಯನ್ನು ಪ್ರಾರಂಭಿಸುತ್ತಿದ್ದೇವೆ. ಗಮಕ ಕಲೆಯಲ್ಲಿ ಯುವಜನರ ಪಾತ್ರ ಕಡಿಮೆಯಾಗುತ್ತಿರುವುದನ್ನು ಮನಗಂಡು ಶ್ರೀ ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನ ಸಂಸ್ಥೆಯವರು ಯುವಜನರಿಗೆ ಗಮಕ ವಾಚನ ಹಾಗೂ ವ್ಯಾಖ್ಯಾನಗಳಲ್ಲಿ ತರಬೇತಿ ನೀಡುತ್ತಿದ್ದಾರೆ. ಹೀಗೆ ತರಬೇತಿ ಪಡೆದಿರುವ ವಿದ್ಯಾರ್ಥಿಗಳು ತಮ್ಮ ಪ್ರತಿಭೆಯನ್ನು ಪ್ರದರ್ಶಿಸಲು ಹಾಗೂ ಗಮಕ ಕಲೆಯ ಬಗ್ಗೆ ಹೆಚ್ಚು ಜನರ ಗಮನ ಸೆಳೆಯಲು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಶ್ರೀ ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನ ಸಂಸ್ಥೆಯ ಸಹಯೋಗದಲ್ಲಿ ಪ್ರತಿತಿಂಗಳಲ್ಲಿ ಒಂದು ದಿನ ಗಮಕ ವಾಹಿನಿ ಕಾರ್ಯಕ್ರಮ ಮಾಲೆಯನ್ನು ರೂಪಿಸಿರುತ್ತದೆ. 3ನೇ ಫೆಬ್ರವರಿಯಂದು ಈ ಕಾರ್ಯಕ್ರಮದ ಉದ್ಘಾಟನೆಯಾಗಲಿದೆ.

ಕನ್ನಡದ ಏಳಿಗೆಗಾಗಿ ಶ್ರಮಿಸಿದಸಾಹಿತ್ಯೋಪಾಸಕರನ್ನು ನೆನಪಿಸಿಕೊಳ್ಳುವ ಉದ್ದೇಶದಿಂದ ಹೊಂಗನಸು ಹೊಸ ಪ್ರಯತ್ನವನ್ನು ಪ್ರಾರಂಭಿಸುತ್ತಿದೆ. ಎರಡನೇ ವರ್ಷದ ಮೊದಲ ಸಂಚಿಕೆಯಿಂದ ಹಿರಿಯ ಸಾಹಿತಿಗಳ ಜನನ ಹಾಗೂ ಮರಣ ದಿನಾಂಕಗಳನ್ನು ಆಯಾ ತಿಂಗಳಿನ ಸಂಚಿಕೆಯಲ್ಲಿ ಪ್ರಕಟಿಸಿ ಅವರುಗಳನ್ನು ನೆನಪಿಸಿಕೊಳ್ಳುವ ಉದ್ದೇಶ ಹೊಂದಿದ್ದೇವೆ. ಪ್ರಾರಂಭದಲ್ಲಿ ಸುಲಭವಾಗಿ ದೊರಕುವ ಮಾಹಿತಿಯನ್ನು ಬಳಸಿಕೊಂಡು ಪ್ರಾತಿನಿಧಿಕವಾಗಿ ಈ ಅಂಕಣವನ್ನು ಪ್ರಾರಂಭಿಸುತ್ತಿದ್ದೇವೆ. ಮಾನ್ಯ ಸದಸ್ಯರು ಹಾಗೂ ಓದುಗರು ತಮ್ಮಲ್ಲಿರಬಹುದಾದ ಮಾಹಿತಿಗಳನ್ನು ನಮ್ಮೊಂದಿಗೆ ಹಂಚಿಕೊಂಡಲ್ಲಿ ಈ ಪ್ರಯತ್ನ ಇನ್ನು ಹೆಚ್ಚು ಅರ್ಥಪೂರ್ಣವಾಗಬಹುದು.

ಬರುವ ತಿಂಗಳುಗಳಲ್ಲಿ ಹೊಂಗನಸು ಪತ್ರಿಕೆಯಲ್ಲಿ ಮತ್ತಷ್ಟು ಹೊಸತುಗಳನ್ನು ಕಾಣುತ್ತೀರಿ ಎಂದು ಭರವಸೆ ನೀಡುತ್ತೇವೆ.

ಎಲ್ಲಾ ಓದುಗರೂ ಹೊಂಗನಸು ಪತ್ರಿಕೆಯ ಚಂದಾದಾರರಾಗಬೇಕೆಂದು ನಮ್ಮ ಆಶಯವಾಗಿದೆ. ಈಗಾಗಲೇ ಅರ್ಧಕ್ಕೂ ಹೆಚ್ಚು ಸದಸ್ಯರು ಚಂದಾದಾರರಾಗಿರುತ್ತರೆ. ಉಳಿದವರೂ ಆದಷ್ಟೂ ಬೇಗನೆ ಚಂದಾದಾರಾಗಬೇಕೆಂದು ಕೋರುತ್ತೇವೆ.

**ಬಿಆರ್ ರವೀಂದ್ರನಾಥ್**
ಸಂಪಾದಕರು

# ಆಧುನಿಕ ವಚನಗಳು

**–ಜಿ. ಅಬ್ದುಲ್ ಬಷೀರ್**

ರೂಪಕ್ಕೆ ಮರುಳಾಗುವವರು ಕೆಲವರು
ಹಣಕ್ಕೆ ಮರುಳಾಗುವವರು ಕೆಲವರು
ಅಧಿಕಾರಕ್ಕೆ ಮರುಳಾಗುವವರು ಕೆಲವರು
ಜಾತಿಗೆ ಮರುಳಾಗುವವರು ಕೆಲವರು
ರೂಪ, ಹಣ, ಅಧಿಕಾರ, ಜಾತಿ, ಮೀರಿದ ಸದ್ಗುಣಕ್ಕೆ
ಮರುಳಾಗದ ಮರುಳರ ಕಂಡು ನಗುತಿದ್ದ
ನಮ್ಮ 'ಅಲ್ಲಾರಖಾ' ॥3॥

# ಪತ್ರಿಕಾ ಪ್ರಕಟಣೆ

ಫೆಬ್ರವರಿ 05, 2016 ನೇ ಶುಕ್ರವಾರದಿಂದ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಹಳಗನ್ನಡ ಕಾವ್ಯಭಾಗಗಳು ಮತ್ತು ಅವಕ್ಕೆ ಸಂಬಂಧಿಸಿದ ಛಂದಸ್ಸನ್ನು ಕುರಿತ ತರಗತಿಗಳು ನಡೆಯುತ್ತವೆ. ಪ್ರತಿ ಶುಕ್ರವಾರ ಮತ್ತು ಶನಿವಾರಗಳಂದು ಸಂಜೆ 5–30 ರಿಂದ 7–00 ಗಂಟೆಯವರೆಗಿನ ಈ ತರಗತಿಗಳು ಮೂರು ತಿಂಗಳ ಅವಧಿಯದಾಗಿದ್ದು, ಪರಿಣತ ಪ್ರಾಧ್ಯಾಪಕರುಗಳು ತರಗತಿಗಳನ್ನು ನಡೆಸಿಕೊಡುತ್ತಾರೆ. ಆಸಕ್ತರಾದ ಎಲ್ಲರಿಗೂ ಅವಕಾಶವಿದೆ. ಪಠ್ಯವಸ್ತುವೂ ಸೇರಿದಂತೆ ಒಟ್ಟು ಅವಧಿಯ ಶುಲ್ಕ ' 300/– (ಮುನ್ನೂರು) ಮಾತ್ರ. ಆಸಕ್ತರು ಪ್ರತಿಷ್ಠಾನದ ಕಚೇರಿಯಲ್ಲಿ 080–26615877 ಸಂಖ್ಯೆಯ ದೂರವಾಣಿಯ ಮೂಲಕವಾಗಿಯಾಗಲೀ, ಖುದ್ದಾಗಿಯಾಗಲೀ ನೋಂದಣಿ ಮಾಡಿಸಿಕೊಳ್ಳಲು ಸೂಚಿಸಲಾಗಿದೆ.05–02–2016 ರಂದು ನೇರವಾಗಿ ನೋಂದಾಯಿಸಿಕೊಳ್ಳಲೂ ಅವಕಾಶವಿದೆ.

# ಫೆಬ್ರವರಿ 2016ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು



**03–02–2016 ಬುಧವಾರ ಸಂಜೆ 6 ಗಂಟೆ**

ಗಮಕ ವಾಹಿನಿ ಕಾರ್ಯಕ್ರಮ ಮಾಲೆ

ಉದ್ಘಾಟನೆ– **ಶ್ರೀಮತಿ ಗಂಗಮ್ಮ ಕೇಶವಮೂರ್ತಿ,**

ಅಧ್ಯಕ್ಷರು, ಕರ್ನಾಟಕ ಸಂಗೀತ ನೃತ್ಯ ಕಲಾ ಅಕಾಡೆಮಿ

ಗಮಕ ರೂಪಕ **"ದೂರ್ವಾಸಾತಿಥ್ಯ"** ಕುಮಾರವ್ಯಾಸ ಭಾರತ

ನಡೆಸಿ ಕೊಡುವವರು : ಶ್ರೀ ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನ ಭಾಗವಹಿಸುವವರು : ಪದ್ಮಿನಿ, ನಾಗರಂಜನಿ, ಸಹನ,ಅಭಿರಾಮ್, ಭರತವಂಶಿ, ರಾಹುಲ್ ನಿರಂಜನ್, ದೀಪಕ್ ವಿ.ಕಶ್ಯಪ್

ನೇತೃತ್ವ : ಶ್ರೀಮತಿ ಸಿ.ವಿ. ಶ್ರೀಮತಿ

---

**05–02–2016 ಶುಕ್ರವಾರ ಸಂಜೆ 6 ಗಂಟೆ ಶಾ. ಬಾಲೂರಾವ್ ಮಾತಿನ ಮಂಟಪ**

**ಅಕ್ಕರಗೊಟ್ಟಿ**

ವಿಷಯ : "ಹುಲಿಯ ಜಂಗುಳಿಯ ಮೊತ್ತ"– ಅರ್ಥ ವಿಶ್ಲೇಷಣೆ

ಚರ್ಚೆಗೆ ಚಾಲನೆ: **ಡಾ.ಎನ್. ಆರ್. ಲಲಿತಾಂಬ**

ಪ್ರಾಧ್ಯಾಪಕರು, ಸರ್ಕಾರಿ ಕಾಲೇಜು, ವಿಜಯನಗರ ಬೆಂಗಳೂರು

---



**8–2–2016 ಸೋಮವಾರ ಸಂಜೆ 6 ಗಂಟೆ**

ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

ಸಾಕ್ಷ್ಯ ಚಿತ್ರಗಳ ಪ್ರದರ್ಶನ

1) ನಡುಗನ್ನಡ 2) ಹೊಸಗನ್ನಡ

---

**17–2–2016 ಬುಧವಾರ ಸಂಜೆ 6 ಗಂಟೆ**

ವಚನವಿಹಾರ

ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ



---



**24–2–2016 ಬುಧವಾರ ಸಂಜೆ 6 ಗಂಟೆ**

**ಎಂ.ಎ. ಜಯಚಂದ್ರ ಆ.ನೆ. ಉಪಾಧ್ಯೆ ಡಿ.ಎಲ್. ನರಸಿಂಹಚಾರ್ಯ**

ಮತ್ತು ಎಂ.ಜಿ ನಂಜುಂಡಾರಾಧ್ಯ ದತ್ತಿ ಕಾರ್ಯಕ್ರಮ

ಉಪನ್ಯಾಸ : **ಡಾ ಎಸ್. ಪಿ. ಪದ್ಮ ಪ್ರಸಾದ್**

ವಿಷಯ : **ಯಶೋಧರ ಕಥಾನಕಗಳು**

# ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

**–ಡಾ.ಪಿ.ವಿ. ನಾರಾಯಣ**

**ಈರುಳ್ಳಿ:** ಇದನ್ನು ನೀರುಳ್ಳಿ ಎಂದೂ ಕರೆಯುತ್ತಾರೆ. ಇದರ ಮೂಲ ಉಳ್ಳಿ; ಇದು ದ್ರಾವಿಡ ಪದವಿದ್ದಂತೆ ತೋರುತ್ತದೆ. ತೆಲುಗಿನಲ್ಲಿ ಉಲ್ಲಿ ಎಂದೂ, ತಮಿಳು ಮಲಯಾಳಂ, ತುಳುಗಳಲ್ಲಿ ಉಳ್ಳಿ ಎಂದೂ ದೊರೆಯುತ್ತದೆ. ಇದೇ ಜಾತಿಯ ಮತ್ತೊಂದು ಗಡ್ಡೆಯನ್ನು ನಾವೀಗ ಬೆಳ್ಳುಳ್ಳಿ ಎನ್ನುತ್ತೇವೆ. ಅದು ಮೂಲತಃ ಉಳ್ಳಿಯನ್ನೇ ಸೂಚಿಸುವಂಥದು. ಈರುಳ್ಳಿಯು ಬಂದುದು ಅನ್ಯದೇಶದಿಂದ ಹಾಗೂ ಈಚೆಗೆ ಎಂದು ವಾದಿಸಿದ್ದ ಪ್ರಖ್ಯಾತ ಚಾರಿತ್ರಿಕ ಸಸ್ಯವಿಜ್ಞಾನಿ ಬಿ.ಜಿ.ಎಲ್. ಸ್ವಾಮಿ ಅವರು, ಉಳ್ಳಿ ಎಂದರೆ ಈರುಳ್ಳಿ ಎಂದು ಭಾವಿಸಿ ಆ ಶಬ್ದ ಬರುವ ಹರಿಹರನ 'ಬಸವರಾಜದೇವರ ರಗಳೆ'ಯಂತಹ ಕೃತಿಯ ಕಾಲದ ಬಗ್ಗೆ ಸಂಶಯ ತಾಳಿದರು. ಈರುಳ್ಳಿ ಬೇರೆ ದೇಶದಿಂದ ಬಂದರೂ ಉಳ್ಳಿ ಅಥವಾ ಬೆಳ್ಳುಳ್ಳಿ ಸ್ಥಳೀಯವಾದುದು ಎಂದು ಅನೇಕರು ವಾದಿಸುತ್ತಾರೆ. ಅದಕ್ಕನುಗುಣವಾಗಿ ಹನ್ನೊಂದನೇ ಶತಮಾನದ ಚಾವುಂಡರಾಯನ 'ಲೋಕೋಪಕಾರ'ವೆಂಬ ವಿಷಯಕೋಶದಲ್ಲಿ ಅಡುಗೆಯ ಇಂಗನ್ನು ತಯಾರಿಸುವಾಗ ಉಳ್ಳಿಯನ್ನು ಬಳಸಿಕೊಳ್ಳುವುದನ್ನು ಉಲ್ಲೇಖಿಸುತ್ತಾನೆ. ಇದೇ ಕಾಲದ ಬ್ರಹ್ಮಶಿವನ 'ಸಮಯ ಪರೀಕ್ಷೆ'ಯಲ್ಲಿ "ಉಳ್ಳಿಯನಾಸ್ವಾದಿಸಿದೊಡೆ ಪಾತಕನಕ್ಕುಂ ಆತಂ ಎಂಬರ್" ಎಂಬ ಮಾತಿರುವುದರಿಂದ ಅದು [ಕೆಲವರಿಗಾದರೂ] ನಿಷಿದ್ಧವಾಗಿದ್ದಂತೆ ತೋರುತ್ತದೆ. ಅಕ್ಕಮ್ಮನೆಂಬ ವಚನಕಾರ್ತಿಯು "ಬಳ್ಳೆ ಭಂಗಿ ನುಗ್ಗಿ ಉಳ್ಳಿ ಮೊದಲಾದವನೆಲ್ಲವ ಬಿಡಬೇಕು" ಎನ್ನುತ್ತಾಳೆ. ಹದಿಮೂರನೆಯ ಶತಮಾನದ ಹರಿಹರನ 'ಬಸವರಾಜದೇವರ ರಗಳೆ'ಯಲ್ಲಿ ಬಸವಣ್ಣ ಇದನ್ನು 'ಅಭೋಜ್ಯ' ಎಂದುದರಿಂದಾಗಿ ಅವನು ಕಿನ್ನರ ಬೊಮ್ಮಯ್ಯನೆಂಬ ಶರಣನ ಕೋಪಕ್ಕೆ ಈಡಾಗಬೇಕಾಯಿತು ಎಂಬ ಸನ್ನಿವೇಶವಿದೆ.

ಹದಿನಾಲ್ಕನೆಯ ಶತಮಾನದ ಮಧ್ಯಭಾಗದಲ್ಲಿ ರಚಿತವಾದ ಮಂಗರಾಜನ 'ಖಗೇಂದ್ರಮಣಿದರ್ಪಣ'ವೆಂಬ ವಿಷವೈದ್ಯಗ್ರಂಥದಲ್ಲಿ ಒಂದೆಡೆ ಮುಳ್ಳುಹಂದಿಯ ವಿಷವನ್ನು ಇಳಿಸಲು ಉಳ್ಳಿಯನ್ನು ಬಳಸುವ ಬಗ್ಗೆ ಹೇಳಿದ್ದರೂ, ಮತ್ತೊಂದೆಡೆ 'ಲಶುನಯುಗ' ಎಂಬ ಮಾತನ್ನು ಬಳಸುತ್ತಾನೆ, ಅಂದರೆ ಎರಡು ಉಳ್ಳಿಗಳು [ಸಂಸ್ಕೃತದಲ್ಲಿ ಬೆಳ್ಳುಳ್ಳಿಗೆ ಲಶುನ ಎಂಬ ಹೆಸರಿದೆ]. ಇದೇನಾದರೂ ಉಳ್ಳಿಯ ಎರಡು ಪ್ರಭೇದಗಳನ್ನು ಸೂಚಿಸುತ್ತಿರಬಹುದೇ?

**ಉರಿ:** ಇದೊಂದು ದ್ರಾವಿಡ ಪದ; ತಮಿಳಿನಲ್ಲಿ ಉರು, ಮಲಯಾಳಂನಲ್ಲಿ ಉರುಪ್ಪಂ, ತೆಲುಗಿನಲ್ಲಿ ಉರಿಯು ಅಥವಾ ಉರಲು ಮತ್ತು ತುಳುವಿನಲ್ಲಿ ಉರಿ ಎಂದಾಗುತ್ತದೆ. ಸುಟ್ಟುಹೋಗು ಎಂಬ ಕ್ರಿಯಾಪದವಾಗಿಯೂ, ಬೆಂಕಿಯ ನಾಲಗೆ ಎಂಬ ನಾಮಪದವಾಗಿಯೂ ಬಳಕೆಯಾಗುತ್ತದೆ.'ಶಬ್ದಮಣಿದರ್ಪಣ'ವು "ಉರಿ–ದಹನೇ" ಎಂದು ಅರ್ಥ ನೀಡುತ್ತದೆ (ಇದು ಒಂದು ಮರದ ಹೆಸರೆಂದೂ ಅಲ್ಲಿದೆ)."ಉರಿ ಮುಟ್ಟಿದರಳೆಯಂತೆ ಅಂತಂಬರಂ ಉರಿದಿತ್ತು" ಎಂಬ 'ಪಂಪಭಾರತ'ದ ಪ್ರಯೋಗದಲ್ಲಿ ಎರಡೂ ಕ್ರಿಯಾರ್ಥಗಳು ಬಳಕೆಯಾಗಿದೆ.'ಉರಿಗಣ್' ಎಂದರೆ ಕೋಪದಿಂದ ಕೂಡಿದ ಕಣ್ಣೂ ಎಂದೂ ಶಿವನ ಬೆಂಕಿಯ ಕಣ್ಣು ಎಂದೂ ಅರ್ಥವಾಗುತ್ತದೆ."ಉರಿಗಣ್ ಕೆತ್ತುವ ಮೀಸೆ ಪೆರ್ಚಿದ ಕೊರಲ್" ಎಂಬ ಚೌಂಡರಸನ 'ನಳಚಂಪು'ವಿನ ಮಾತಲ್ಲಿ ಮೊದಲನೆಯ ಅರ್ಥವೂ, "ಕೊರಲ ಕಜ಼್ ಶಿರದ ಪೆಜ಼್ ನೊಸಲ ಉರಿಗಣ್" ಎಂಬ ರನ್ನನ 'ಗದಾಯುದ್ಧ'ದ ಪ್ರಯೋಗದಲ್ಲಿ ಎರಡನೆಯ ಅರ್ಥವೂ ಸ್ಪಷ್ಟವಾಗಿದೆ. 'ಉರಿದೇಳ್' ಎಂದರೆ ಕೋಪದಿಂದ ಕೆರಳು ಎಂದರ್ಥ: "ಚರನ ನುಡಿಗೇಳ್ದು ಕೋಪದಿಂದುರಿದೇಳ್ದಂ" – ಆಚಣ್ಣನ 'ವರ್ಧಮಾನಪುರಾಣ'. 'ಉರಿಗಣೆ' ಎಂಬುದು ಉರಿಯುವ ಬಾಣ ಎಂದರೆ ಆಗ್ನೇಯಾಸ್ತ್ರ: "ಕೃತಾಂತನೆಚ್ಚ ಉರುಗಣೆಯಂತೆ ಬಂದುದು ಲಯಾನಳಕಲ್ಪನದಾಘಜಾಳಂ" ಎಂಬುದು ನೇಮಿನಾಥ ಕವಿಯ 'ಅರ್ಧನೇಮಿ ಪುರಾಣ'ದ ಪ್ರಯೋಗ. ಇದನ್ನು 'ಕಾದಂಬರಿ'ಯು 'ಉರಿಯಂಬು' ಎನ್ನುತ್ತದೆ, ("ಉರಿಯಂಬಿನ ಪೊಗೆ ಮೊಗಸಿದಂತೆ"). ಉರಿಯಂತೆ ಕೆಂಪಾದ ಎಂಬರ್ಥದಲ್ಲಿಯೂ ಸಮಾಸದ ಪೂರ್ವಪದದಲ್ಲಿ ಉರಿ ಬಳಕೆಯಾಗುತ್ತದೆ: "ತೊಳಪ ದಾಡೆ ಮಿಳಿರ್ವ ಉರಿಗೇಸಂ ಪೇರೊಡಲ್" ('ಪಂಪಭಾರತ'). ಉರಿಮಂಜು (ಉರಿಮಣ್ಣು) ಕೆಂಪಾದ ಮಣ್ಣನ್ನು ಸೂಚಿಸುತ್ತದೆ. ಅಧಿಕ ತಾಪವುಳ್ಳುದೆಲ್ಲವನ್ನೂ ಉರಿ ಎಂಬ ಪೂರ್ವಪದದಲ್ಲಿ ಸೂಚಿಸುವ ಅನೇಕ ಸಮಾಸಪದಗಳುಂಟು: ಉರಿಬಿಸಲು, ಉರಿನಾಲಗೆ, ಉರಿಜ್ವರ, ಉರಿಯೂತ ಇತ್ಯಾದಿ.

ಉರಿ ಎಂಬುದು ಉತ್ತರಪದವಾಗುಳ್ಳ ಅನೇಕ ಸಮಾಸಗಳೂ ಇವೆ: ಹೊಟ್ಟೆಉರಿ (ಅಸೂಯೆ), ಕಣ್ಣುರಿ (ಕೋಪ), ಮೈಯುರಿ ಇತ್ಯಾದಿ.

### ಅಭಿನಂದನೆಗಳು

ಆಚಾರ್ಯ ಪಾಠಶಾಲಾ ಕಾಲೇಜಿನ ನಿವೃತ್ತ ಇತಿಹಾಸದ ಪ್ರಾಧ್ಯಾಪಕರೂ ಅಹಿಂದ ನಾಯಕರೂ ಹಿಂದುಳಿದ ವರ್ಗಗಳ ಆಯೋಗದ ಮಾಜಿ ಸದಸ್ಯರೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಆಜೀವ ಸದಸ್ಯರೂ ಆದ ಪ್ರೊ. ಎನ್.ವಿ. ನರಸಿಂಹಯ್ಯ ಅವರನ್ನು ಕರ್ನಾಟಕ ಸರ್ಕಾರ ಇತ್ತೀಚೆಗೆ ಡಿ. ದೇವರಾಜು ಅರಸು ಸಂಶೋಧನಾ ಸಂಸ್ಥೆಗೆ ನಿರ್ದೇಶಕರನ್ನಾಗಿ ನೇಮಿಸಿದೆ. ಹೊಂಗನಸು ಶ್ರೀಯುತರಿಗೆ ಹೃತ್ಪೂರ್ವಕವಾದ ಅಭಿನಂದನೆಗಳನ್ನು ಸಲ್ಲಿಸುತ್ತದೆ.

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಡಿಸೆಂಬರ್2015 –ಜನವರಿ 2016 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

### 25–12–2015 ಶುಕ್ರವಾರ ಬೆಳಿಗ್ಗೆ 10.30 ಪ್ರಶಸ್ತಿ ಪ್ರದಾನ ಕಾರ್ಯಕ್ರಮ

### 'ಶಾ' ಬಾಲೂರಾವ್ ಅನುವಾದ ಪ್ರಶಸ್ತಿ' ಮತ್ತು 'ಶಾ'ಬಾಲೂರಾವ್ ಯುವಬರಹಗಾರ ಪ್ರಶಸ್ತಿ'

2014 ರಲ್ಲಿ ಪ್ರಕಟವಾದ ಪುಸ್ತಕಗಳಿಗೆ ಕೊಡ ಮಾಡುವ **'ಶಾ' ಬಾಲೂರಾವ್ ಅನುವಾದ ಪ್ರಶಸ್ತಿ' ಮತ್ತು 'ಶಾ' ಬಾಲೂರಾವ್ ಯುವಬರಹಗಾರ ಪ್ರಶಸ್ತಿ'**ಗಳನ್ನು ಈ ವರ್ಷ **ಪ್ರೊ. ಹೆಚ್.ಎಸ್. ರಾಘವೇಂದ್ರರಾವ್** ಅವರು ಅನುವಾದಿಸಿದ **ಹತ್ತು ದಿಕ್ಕಿನ ಬೆಳಕುಪುಸ್ತಕಕ್ಕೆ 'ಶಾ' ಬಾಲೂರಾವ್ ಅನುವಾದ ಪ್ರಶಸ್ತಿ'** ಹಾಗೂ ಶ್ರೀ **ಪದ್ಮನಾಭ ಭಟ್ ಶೇವ್ಕಾರ್** ಅವರು



ರಚಿಸಿದ **ಕೇಪಿನ ಡಬ್ಬಿ** ಪುಸ್ತಕಕ್ಕೆ **'ಶಾ' ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ'** ಗಳನ್ನು ಹಿರಿಯ ವಿಮರ್ಶಕ ಪ್ರೊ. ಸಿ ಎನ್. ರಾಮಚಂದ್ರನ್ ಅವರು ನೀಡಿದರು.



ಈ ಪ್ರಶಸ್ತಿಗಳನ್ನು ಸ್ಥಾಪಿಸಿರುವ ಶ್ರೀಮತಿ ಕಮಲಿನಿ ಶಾ ಬಾಲೂರಾವ್ ಅವರು ಉಪಸ್ಥಿತರಿದ್ದರು. ಪುಸ್ತಕಗಳನ್ನು ಆಯ್ಕೆ ಮಾಡಿದ ಪ್ರೊ. ಹೆಚ್. ಎನ್. ಮುರಳೀಧರ ಹಾಗೂ ಪ್ರೊ.ಕೆ.ಎಸ್. ಮಧುಸೂದನ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಅಧ್ಯಕ್ಷ ಪ್ರೊ. ಎಂ.ಹೆಚ್. ಕೃಷ್ಣಯ್ಯ ಅವರುಗಳು ಪ್ರಶಸ್ತಿ ಪುರಸ್ಕೃತರನ್ನು ಗೌರವಿಸಿ ರೂ.25000/– ಮೊತ್ತದ ಚೆಕ್ ಗಳನ್ನು ಹಸ್ತಾಂತರಿಸಿದರು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷ ಪ್ರೊ. ಪಿ.ವಿ. ನಾರಾಯಣ ಅವರು ಈ ಪ್ರಶಸ್ತಿಗಳ ಹಿನ್ನಲೆ ಹಾಗೂ ಪ್ರತಿಷ್ಠಾನದ ಚಟುವಟಿಕೆಗಳನ್ನು ವಿವರಿಸಿ ಎಲ್ಲರನ್ನೂ ಸ್ವಾಗತಿಸಿದರು. ಗೌರವ ಕಾರ್ಯದರ್ಶಿ ಪ್ರೊ.ಅಬ್ದುಲ್ ಬಶೀರ್ ನಿರೂಪಣೆ ಮಾಡಿದರು. ಗೌರವ ಕಾರ್ಯದರ್ಶಿ ರವೀಂದ್ರನಾಥ್ ವಂದನಾರ್ಪಣೆ ನಡೆಸಿಕೊಟ್ಟರು.

---

### 21–12–15 ಸೋಮವಾರ

**ಎಂ. ಎ ರಾಮಾನುಜಯ್ಯಂಗಾರ್ ದತ್ತಿಕಾರ್ಯಕ್ರಮ**

ಉಪನ್ಯಾಸ : ಡಾ॥ ಕೆಳದಿ ವೆಂಕಟೇಶ ಜೋಯಿಸ್ (ಕ್ಯೂರೇಟರ್, ಕೆಳದಿ ಮ್ಯೂಸಿಯಂ)

**ವಿಷಯ : ಹಸ್ತಪ್ರತಿಗಳ ಪಾರಂಪರಿಕ ರಕ್ಷಣೆ**

ಈ ವರ್ಷದ ಎಂ.ಎ.ರಾಮಾನುಜಯ್ಯಂಗಾರ್ ದತ್ತಿ ಕಾರ್ಯಕ್ರಮವು, ಒಂದು ವಿಭಿನ್ನವಾದ ಉಪನ್ಯಾಸದೊಂದಿಗೆ ಸಂಪನ್ನವಾಯಿತು ಎನ್ನಬಹುದು.ಕೆಳದಿ ಮ್ಯೂಸಿಯಂನ ಕ್ಯೂರೇಟರ್ ಡಾ॥ ಕೆಳದಿ ವೆಂಕಟೇಶ್ ಜೋಯಿಸ್ ಅವರು ಪ್ರಾಚೀನ ಪರಂಪರೆಯಲ್ಲಿ ಹಸ್ತ ಪ್ರತಿಗಳ ಸಂರಕ್ಷಣಾ ವಿಧಾನಗಳ ಬಗ್ಗೆ ಪ್ರಾತ್ಯಕ್ಷಿತೆಯನ್ನೊಳಗೊಂಡಂತೆ ತಮ್ಮ ಉಪನ್ಯಾಸವನ್ನು ನೀಡಿದರು. ನಮ್ಮ ಪೂರ್ವಜರು, ಈಗಿನ ವೈಜ್ಞಾನಿಕ ರೀತಿಯ ಪರಿಚಯವಿಲ್ಲದಿದ್ದರೂ, ಇದಕ್ಕಿಂತಲೂ ಹೆಚ್ಚಾಗಿ ಪಾರಂಪರಿಕ ರೀತಿಯಲ್ಲಿ ಪ್ರಾಚೀನ ಹಸ್ತ ಪ್ರತಿಗಳನ್ನು ಸಂರಕ್ಷಿಸಿ ಕಾಪಾಡಿಕೊಂಡು ಬಂದಿರುವುದು, ಮುಂದಿನ ಪೀಳಿಗೆಗೆ ವರದಾನವಾಗಿದೆ, ಹಾಗೂ ಹಸ್ತ ಪ್ರತಿಗಳು ಕಣ್ಮರೆಯಾಗದ ರೀತಿಯಲ್ಲಿ ಜತನದಿಂದ ಜ್ಞಾನ ಭಂಡಾರವನ್ನು ಕಾಪಾಡಿಕೊಂಡು ಬಂದಿರುವುದು ಕೃತಜ್ಞತೆಗೆ ಪಾತ್ರವಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಈಗ ಕೆಲವು ವರ್ಷಗಳಿಂದ, ಆಧುನಿಕ ರೀತಿಯಲ್ಲಿ ಹಸ್ತ ಪ್ರತಿಗಳ ಆಯಸ್ಸನ್ನು ಇನ್ನಷ್ಟು ವೃದ್ಧಿಗೊಳಿಸಿ, ಅವುಗಳನ್ನು ಡಿಜಿಟಲೈಜೇಷನ್‌ಗೆ ಒಳಪಡಿಸಿ ಶಾಶ್ವತವಾಗಿ ಉಳಿಸಿಕೊಳ್ಳುವುದು ಅಗತ್ಯವೆನಿಸಿ, ಎಲ್ಲಾ ಸಂಗ್ರಹಾಲಯಗಳೂ, ಈ ಕೆಲಸದಲ್ಲಿ ನಿರತರಾಗಿರುವುದು ಕಂಡು ಬಂದಿದೆ ಎಂದು ತಿಳಿಸಿದರು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷ ಪ್ರೊ. ಪಿ.ವಿ. ನಾರಾಯಣ, ಗೌರವ ಕಾರ್ಯದರ್ಶಿ ಪ್ರೊ. ಅಬ್ದುಲ್ ಬಶೀರ್, ಗೌರವ ಕಾರ್ಯದರ್ಶಿ ರವೀಂದ್ರನಾಥ್, ಖಜಾಂಚಿ ಶ್ರೀ ಎಂ ಎಸ್. ರಾಮಪ್ರಸಾದ್ ಹಾಗೂ ಇತರರು ಉಪಸ್ಥಿತರಿದ್ದರು.

**6ನೇ ಪುಟಕ್ಕೆ**

5ನೇ ಪುಟದಿಂದ

**07-01- 2016ಗುರುವಾರ ಕನ್ನಡ ಸಂಸ್ಕೃತಿ ದರ್ಶನ**

**ಸಾಕ್ಷ್ಯ ಚಿತ್ರ ಪ್ರದರ್ಶನ ಐರೋಪ್ಯ ಮಿಷನರಿಗಳ ಕೊಡುಗೆಗಳು'**

ಐರೋಪ್ಯ ಮಿಷನರಿಗಳ ಕೊಡುಗೆಗಳುಬಗ್ಗೆ ಐತಿಹಾಸಿಕ ಪುರಾವೆಗಳೊಂದಿಗೆ ಆಸಕ್ತಿದಾಯಕವಾಗಿ ಚಿತ್ರೀಕರಿಸಲಾದ ಸಾಕ್ಷ್ಯಚಿತ್ರವನ್ನು ಪ್ರದರ್ಶಿಸಲಾಯಿತು. ಇಂದಿನ ಕರ್ನಾಟಕ ರಾಜ್ಯದ ಏಳಿಗೆ ಹಾಗೂ ಇಂದು ಕನ್ನಡ ಭಾಷೆಯು ಉನ್ನತ ಮಟ್ಟವನ್ನು ತಲುಪಲು ಐರೋಪ್ಯ ಮಿಷನರಿಗಳು ಪಟ್ಟ ಶ್ರಮ ಹಾಗೂ ಅವರ ಕೊಡುಗೆಗಳ ಬಗ್ಗೆ ಇದುವರೆಗೂ ತಿಳಿದಿಲ್ಲದಿದ್ದ ಹಲವಾರು ಅಂಶಗಳು ವೀಕ್ಷಕರಿಗೆ ಲಭ್ಯವಾಯಿತು.

**ವಚನ ವಿಹಾರ**

**ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ**

**ಮಂಗಳವಾರ 19-01-2016**ರಂದು ಸಂಜೆ ಆರು ಗಂಟೆಗೆ ವಚನ ವಿಹಾರ ಸಾಕ್ಷ್ಯ ಚಿತ್ರಗಳಲ್ಲಿ ಅಕ್ಕ ಮಹಾದೇವಿಯ ವಚನಗಳ ಗಾಯನ ಮತ್ತು ವ್ಯಾಖ್ಯಾನಗಳನ್ನು ಒಳಗೊಂಡಿರುವ ವಿಡಿಯೋ ಚಿತ್ರಗಳ ಪ್ರದರ್ಶನ ನಡೆಯಿತು. ಸುಮಾರು ಒಂದು ಗಂಟೆಯ ಈ ಸಂಗೀತಮಯ ಕಾರ್ಯಕ್ರಮದಲ್ಲಿ ವಚನ ಚಳುವಳಿ ಬಗ್ಗೆ ಬಹಳ ರಸವತ್ತಾಗಿ ವಿವರಿಸಲಾಗಿದ್ದು ಜೊತೆಗೆ ವಚನಗಳನ್ನು ಪ್ರಸಿದ್ಧ ಗಾಯಕರು ಇಂಪಾಗಿ ಹಾಡಿರುವ ಭಾಗಗಳೂ ಇದ್ದು ಅಧಿಕ ಸಂಖ್ಯೆಯಲ್ಲಿ ಹಾಜರಿದ್ದ ಸಭಿಕರಿಗೆ ಹೊಸ ಅನುಭವವನ್ನು ತಂದುಕೊಟ್ಟಿತು.

| **ಫೆಬ್ರವರಿ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು** | |
|---|---|
| ಪಂಜೆ ಮಂಗೇಶರಾವ್ | 22-02-1874 |
| ಎ.ಆರ್. ಕೃಷ್ಣಶಾಸ್ತ್ರಿ | 12-02-1889 |
| ಹಡೇಕರ್ ಮಂಜಪ್ಪ | 18-02-1889 |
| ಸಿಂಪಿ ಲಿಂಗಣ್ಣ | 10-02-1905 |
| ಆ.ನೆ. ಉಪಾಧ್ಯೆ | 06-02-1906 |
| ಎಚ್.ಎಲ್. ನಾಗೇಗೌಡ | 11-02-1915 |
| ಬಿ.ಬಿ. ಎಲ್. ಸ್ವಾಮಿ | 05-02-1916 |
| ಎಂ. ಗೋಪಾಲ ಕೃಷ್ಣ ಅಡಿಗ | 18-02-1918 |
| ಜಿ. ಎಸ್. ಶಿವರುದ್ರಪ್ಪ | 07-02-1926 |
| ಹೆಚ್. ತಿಪ್ಪೆರುದ್ರಸ್ವಾಮಿ | 03-02-1928 |
| ಹಾ.ಮಾ ನಾಯಕ | 05-02-1931 |
| ಡಿ.ಆರ್. ನಾಗರಾಜ್ | 20-2-1554 |
| ಕೇಶವ ಭಟ್ಟ ಟಿ | 02-02-1920 |
| **ಫೆಬ್ರವರಿ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು** | |
| ಆಲೂರು ವೆಂಕಟರಾಯರು | 25-2-1994 |
| ಟಿ.ಎಸ್. ವೆಂಕಣ್ಣಯ್ಯ | 24-2-1939 |
| ಎ.ಆರ್. ಕೃಷ್ಣಶಾಸ್ತ್ರಿ | 1-2-1968 |
| ಸಂಸ | 14-2-1939 |
| ಎಸ್.ವಿ. ರಂಗಣ್ಣ | 18-2-1987 |
| ಶ್ರೀ ಮುಗಳಿ@ರಸಿಕರಂಗ@ರಸಿಕ | 20-2-1993 |

# ಶಾಶ್ವತ ನಿಧಿ

## ಸಾಹಿತ್ಯಾಸಕ್ತರಲ್ಲಿ ಒಂದು ಬಿನ್ನಹ

ಪ್ರತಿಷ್ಠಾನದ ಮುಂದೆ ಹಸ್ತಪ್ರತಿಗಳ ರಕ್ಷಣೆ, ಡಿಜಿಟೀಕರಣ ಮತ್ತು ಅಧ್ಯಯನ, ಮಾಧ್ಯಮ ಕನ್ನಡ ಬರವಣಿಗೆಯ ಬಗೆಗಿನ ಸ್ನಾತಕೋತ್ತರ ಡಿಪ್ಲೊಮ ತರಗತಿಗಳನ್ನು ನಡೆಸುವುದು, ನಮ್ಮ ಹಿರಿಯ ಸಂಶೋಧಕರ ಬಗ್ಗೆ ಸಾಕ್ಷ್ಯಚಿತ್ರಗಳನ್ನು ತಯಾರಿಸುವ ಯೋಜನೆ, ಮೌಲಿಕ ಪುಸ್ತಕಗಳ ಪ್ರಕಟಣೆ, ಹಳಗನ್ನಡದ ವಿಶೇಷ ಅಧ್ಯಯನಕ್ಕಾಗಿ ವಿಶೇಷ ಕಾರ್ಯಕ್ರಮಗಳನ್ನು ರೂಪಿಸುವುದು ಇಂತಹ ಹಲವಾರು ಯೋಜನೆಗಳು ಮುಂದಿವೆ. ಇವಕ್ಕೆಲ್ಲ ಹಣದ ಆವಶ್ಯಕತೆ ಇದೆ.

ಈ ದಿಸೆಯಲ್ಲಿ ಪ್ರತಿಷ್ಠಾನವು ಒಂದು ಶಾಶ್ವತ ನಿಧಿಯನ್ನು ಸ್ಥಾಪಿಸುವ ಆಲೋಚನೆಯಲ್ಲಿದೆ. ಈ ನಿಧಿಯ ಮೇಲಿನ ಬಡ್ಡಿ ಹಣದಿಂದ ನಮ್ಮ ಮುಂದಿನ ಯೋಜನೆಗಳನ್ನು ಕಾರ್ಯಗತ ಗೊಳಿಸುವುದು ನಮ್ಮ ಉದ್ದೇಶವಾಗಿರುತ್ತದೆ. ನಮ್ಮ ಉದ್ದೇಶ ಸಾಕಾರಗೊಳ್ಳಲು ತಮ್ಮಂತಹ ಉದಾರಿಗಳ ನೆರವು ಅಗತ್ಯ.

ತಮ್ಮಲ್ಲಿ ವಿಶೇಷವಾಗಿ ಮಾಡುವ ಮನವಿಯೆಂದರೆ, ತಾವು ಉದಾರವಾಗಿ ದಾನದ ರೂಪದಲ್ಲಿ ನಮ್ಮ ಸಂಸ್ಥೆಗೆ ಧನಸಹಾಯ ಮಾಡಬೇಕೆಂದು ತಮ್ಮನ್ನು ಕೋರುತ್ತೇವೆ. ತಮ್ಮಂತಹವರು ನಮ್ಮ ಚಟುವಟಿಕೆಗಳಿಗೆ ಬೆಂಬಲ ನೀಡಿದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರ ಮತ್ತಷ್ಟು ಶ್ರೀಮಂತವಾಗಲು ಸಾಧ್ಯವಾಗಬಹುದಾಗಿರುತ್ತದೆ.

ತಾವು ದತ್ತಿನಿಧಿಗಳನ್ನು ಸ್ಥಾಪಿಸುವ ಮೂಲಕ, ಶಾಶ್ವತ ನಿಧಿಗೆ ಉದಾರವಾಗಿ ಧನಸಹಾಯ ಮಾಡುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳನ್ನು ಖರೀದಿಸುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳ ಪ್ರಾಯೋಜಕತ್ವವನ್ನು ವಹಿಸಿಕೊಳ್ಳುವುದರ ಮೂಲಕ ಹಲವು ವಿಧಗಳಲ್ಲಿ ನಮ್ಮ ಜೊತೆ ಕೈ ಜೋಡಿಸಬಹುದಾಗಿರುತ್ತದೆ.

ಪ್ರತಿಷ್ಠಾನಕ್ಕೆ ನೀಡುವ ನಿಧಿಯ ಮೊಬಲಗಿನ ಮೇಲೆ ಭಾರತ ಸರ್ಕಾರದ ಆದಾಯ ತೆರಿಗೆ ಕಾನೂನಿನ '80 ಜಿ' ಅನ್ವಯ ತೆರಿಗೆ ವಿನಾಯಿತಿ ದೊರೆಯುತ್ತದೆ.

ತಾವು ತಮ್ಮ ಕಾಣಿಕೆಗಳನ್ನು ಚೆಕ್/ಡಿಡಿ ಮೂಲಕ ಪ್ರತಿಷ್ಠಾನದ ಹೆಸರಿನಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು.

ಶಾಶ್ವತ ನಿಧಿಗೆ 2015 ರನವೆಂಬರ್ ಹಾಗೂ ಡಿಸೆಂಬರ್ ಹಾಗೂ ಜನವರಿ ತಿಂಗಳುಗಳಲ್ಲಿ ಕಾಣಿಕೆ ನೀಡಿರುವವರ ಪಟ್ಟಿ:

ಡಾ.ಪಿ.ವಿ. ನಾರಾಯಣ, ಶ್ರೀ ಬಿ.ಎಸ್. ಗುರುಪ್ರಸಾದ್, ಶ್ರೀಮತಿ ನಾಗಮಣಿ ಎಸ್. ರಾವ್, ಶ್ರೀ ಟಿ.ಆರ್. ಅನಂತ ರಾಮು,

ಶ್ರೀಮತಿ ವಿ.ರಮಾಮಣಿ, ಶ್ರೀಮತಿ ಎಮ್. ವಿ. ಉಷಾದೇವಿ, ಶ್ರೀಮತಿ ಟಿ.ಕೆ.ಶೈಲಜಾ, ಶ್ರೀಮತಿ ವತ್ಸಲಾ ರಾವ್, ಕೆ.ಟಿ. ಶಂಕರ, ವಿ.ಎಸ್. ಮುಕುಂದ,

ಇಲ್ಲಿಯವರೆಗೆ ಸಂಗ್ರಹಿಸಲಾದ ಮೊತ್ತ ರೂ. 16.69 ಲಕ್ಷ

# 'ಅಕ್ಕರ ಗೊಟ್ಟಿ' (ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ)

**ಅಕ್ಕರಗೊಟ್ಟಿ ಕಾರ್ಯಕ್ರಮ-3**

**(11-1-2016 ಸೋಮವಾರ) ಸಂಜೆ 5:30 ರಿಂದ 7:30 ಶಾ. ಬಾಲೂರಾವ್ ಮಾತಿನ ಮಂಟಪ**

**ವಿಷಯ :ಲಕ್ಷ್ಮೀಶ ವಿರಚಿತ- ಕನ್ನಡ ಜೈಮಿನಿ ಭಾರತ - - ಕೆಲವುಪದ್ಯಗಳ ಅರ್ಥಜಿಜ್ಞಾಸೆಸಂಧಿ 21 : ಪದ್ಯಗಳು 3,26,61**

**ಚರ್ಚೆಗೆ ಚಾಲನೆ: ಕೆ.ವಿ. ವರದರಾಜ ಅಯ್ಯಂಗಾರ್(9632461250)**

ಜೈಮಿನೀ ಭಾರತದ 21ನೆಯ ಸಂಧಿಯಲ್ಲಿನ ಪದ್ಯ 3, 26 ಮತ್ತು 61 ಪದ್ಯಗಳ ಆಶಯವನ್ನು ಕುರಿತಂತೆ ಶ್ರೀ ಕೆ.ವಿ. ವರದರಾಜು ಅಯ್ಯಂಗಾರ್ ಚರ್ಚೆಗೆ ಚಾಲನೆ ನೀಡಿದರು. ಲಕ್ಷ್ಮೀಶನು ಲಕ್ಷ್ಮಣಶತ್ರುಘ್ನರ ಪ್ರಾಣಗಳಿಗೇ ಸಂಚಕಾರ ತಂದಿರುವ ಅಜೇಯರಾದ ಕುಶಲವರನ್ನು ಯುದ್ಧದಲ್ಲಿ ಎದುರಿಸುವುದು ಕಷ್ಟ ಎಂಬ ಮಾತನ್ನು ದೂತರು ರಾಮನಗೆ ಹೇಳುವಾಗ ಕುಶಲವರೊಂದಿಗೆ ಹೋರಾಡುವವರ ಸ್ಥಿತಿ "ಗೋವರ್ಧನಂಗೆ ಮೊಲೆಕೊಟ್ಟ ಪೂತನಿ"ಯಂತಾಗಿದೆ ಎಂಬ ಹೋಲಿಕೆ ಕೊಡುತ್ತಾನೆ. ಕವಿಯು ಸಂಗ್ರಾಮದ ವಿವರಗಳ್ನು ಬಣ್ಣಿಸವುದರಲ್ಲಿ ತನ್ಮಯನಾಗಿ, ತ್ರೇತ್ರಾಯುಗದಲ್ಲಿ ನಡೆದ ಘಟನೆಗೆ ದ್ವಾಪರಯುಗದ ಉದಾಹರಣೆ ಯನ್ನಿತ್ತಿರುವುದು ಕಾಲೌಚಿತ್ಯವಿಲ್ಲದ ದೋಷಕ್ಕೆ ಒಳಗಾಗಿದೆ. ಇದನ್ನು ಇಲ್ಲಿಯವರೆಗೂ ಯಾರಾದರೂ ಗಮನಿಸಿರುವರೇ? ಎಂದರು.

ಇನ್ನು, ಪದ್ಯ 26 ಮತ್ತು 61ರ ವಿಚಾರ: 26 ನೆಯ ಪದ್ಯದಲ್ಲಿ ಶ್ರೀರಾಮನು ಕುಶಲವರ ಕಾಳಗಸ್ಥಾನಕ್ಕೆ ತೆರಳಿ, "ನೀವಿಬ್ಬರೂ ಯಾರು? ನಿಮ್ಮ ಜನನಿ, ಜನನ, ಜನಕರ ಬಗ್ಗೆ ತಿಳಿಸಿ"ಎಂದು ಕೇಳಿದಾಗ ಕುಶನು "ಅವಳಿಗಳಾದ ನಮ್ಮಿಬ್ಬರ ತಾಯಿ ಸೀತೆ; ನಗಮ, ಆಗಮ, ಸ್ಮೃತಿಗಳನ್ನೆಲ್ಲ ಕಲಿಸಿ, ಬಿಲ್ವಿದ್ಯೆಯನ್ನು ಕಲಿಸಿದ ಗುರು ವಾಲ್ಮೀಕಿ" ಎನ್ನುತ್ತಾರೆ. ಇಲ್ಲಿ ಶ್ರೀರಾಮನು ಕುಶಲವರ ಜನನದ ವಿವರಗಳನ್ನೆಲ್ಲ ತಿಳಿದುಕೊಂಡಿರುವನು. ಆದರೆ ಮುಂದೆ 61ನೇ ಪದ್ಯದಲ್ಲಿ ಇದೇ ಶ್ರೀರಾಮನು ಮತ್ತೆ ಕುಶಲವರನ್ನು "ಆರ ತನುಜಾತರೆಲೆ ಮಕ್ಕಳಿರ" ಎಂದು ಮತ್ತೆ ಕೇಳಿದಂತೆ ಚಿತ್ರಿಸಿ ಕವಿಯು "ಪುನರುಕ್ತಿ ದೋಷ"ಕ್ಕೆ ಪಕ್ಕಾಗುತ್ತಾನೆ. ಜೊತೆಗೆ, ಪದ್ಯ 29ರಲ್ಲಿ "ನಮ್ಮನ್ನು ಪಡೆದ ಪುರುಷ ಯಾರು:" ಎಂದು ಕೇಳುವುದು. ಕ್ರೌರ್ಯದ ಪರಮಾವಧಿಯಾಗಿದೆ - ಎಂಬ ಅಭಿಪ್ರಾಯಗಳನ್ನು ಮಂಡಿಸಿದರು.

ಚರ್ಚೆಯಲ್ಲಿ ಭಾಗವಹಿಸಿದ್ದ ಪ್ರೊ. ಜಿ. ಅಶ್ವತ್ಥನಾರಾಯಣ ಅವರು 'ಮೊಲೆಗೊಟ್ಟ ಪೂತನಿಯವೋಲಾಯ್ತು' ದೃಷ್ಟಾಂತವು ವಿಷಯ ಮಂಡಕರು ಹೇಳಿದಂತೆ ಅನೌಚಿತ್ಯದಿಂದ ಕೂಡಿದೆಯೆಂದೂ, ಈ ಅಂಶವನ್ನು ಅಮೃತ ಸೋಮೇಶ್ವರ ಅವರೂ ಗಮನಿಸಿದ್ದಾರೆಂದೂ ನುಡಿದರು; ಡಾ. ಪಿ. ವಿ ನಾರಾಯಣ




ಅವರು "ಇದು ಕಾವ್ಯಾಭಿವ್ಯಕ್ತಿಯ ಸಂಪ್ರದಾಯದ ವಿಷಯ; ದೃಷ್ಟಾಂತದ ಭಾವವನ್ನು ಮಾತ್ರ ನಾವು ಗಮನಿಸಬೇಕು" ಎಂದು ಅಭಿಪ್ರಾಯಪಟ್ಟರು. "ನೀವು ಯಾವ ಗಂಡಸಿಗೆ ಹುಟ್ಟಿದವರು" ಎಂದು ರಾಮ ಕುಶಲವರನ್ನು ಕೇಳುವುದು ಕ್ರೌರ್ಯದಂತೆ ಕಾಣಿಸಬಹುದು; ಆದರೆ ಸೀತೆಯನ್ನು ಅಗ್ನಿಪ್ರವೇಶಕ್ಕೆ ಗುರಿಮಾಡಿದ ಸಂದರ್ಭದಲ್ಲಿಯೂ, ತುಂಬುಗರ್ಭಿಣಿಯನ್ನು ಸುಳ್ಳು ಹೇಳಿ ಕಾಡಿಗಟ್ಟುವ ಸಂದರ್ಭದಲ್ಲಿಯೂ ಶ್ರೀರಾಮನ ಗಂಡುಕ್ರೌರ್ಯ ಎದ್ದು ಕಾಣುತ್ತದೆ; ರಾಮನ ಪಾತ್ರವನ್ನು ದೇವರಂತೆ ಕಾಣದೆ ಮನುಷ್ಯನಂತೆ ಕಂಡಾಗ ಇದು ಅವನಿಗೆ ಸಹಜ ಅನ್ನಿಸುತ್ತದೆ ಎಂದು ಶ್ರೀಮತಿ ಸುಶೀಲಮ್ಮ ಅವರು ಅಭಿಪ್ರಾಯಿಸಿದರು. ರಾಮ ಕುಶಲವರನ್ನು ಮಾತನಾಡಿಸಿದಾಗ ಕುಶಲವರು ಸಮಾಧಾನಚಿತ್ತದಿಂದ ಉತ್ತರಿಸುತ್ತಾರೆ ಏಕೆಂದರೆ ಅವರಿಗೆ ತಾವು ಶ್ರೀರಾಮನ ಮಕ್ಕಳು ಎಂದು ಅವರ ತಾಯಿ ಸೀತೆ ತಿಳಿಸಿಲ್ಲದಿರುವ ಸಾಧ್ಯತೆಗಳೂ ಇರಬಹುದು ಎಂದು ಅವರು ಅಭಿಪ್ರಾಯ ಪಟ್ಟರು.

ಈ ಬಗ್ಗೆಯ ಚರ್ಚೆಯು ತುಂಬ ಉಪಯುಕ್ತವಾಗಿ ಚಿಂತನೆಗಳ ಕಡೆತದಿಂದ ಹೊಸ ಆಲೋಚನೆಗಳಿಗೆ ಎಡೆಗೊಟ್ಟಿತು. ಚರ್ಚೆಯಲ್ಲಿ ಡಾ. ಜಯಮ್ಮ ಕರಿಯಣ್ಣ, ಪ್ರೊ. ಅಬ್ದುಲ್ ಬಶೀರ್, ಶ್ರೀ ಗುರುಪ್ರಸಾದ್, ಪ್ರೊ.ಆರ್. ಲಕ್ಷ್ಮೀನಾರಾಯಣ, ರಾಮಪ್ರಸಾದ್, ರವೀಂದ್ರನಾಥ್ ಮುಂತಾದವರು ಪಾಲ್ಗೊಂಡು ಕಾರ್ಯಕ್ರಮ ಯಶಸ್ವಿಯಾಗಲು ಸಹಕರಿಸಿದರು.

**ಸದಸ್ಯರ ಗಮನಕ್ಕೆ**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ನಡೆಸುವ ಕಾರ್ಯಕ್ರಮಗಳ ವಿವರ ಗಳನ್ನು ಪ್ರತಿತಿಂಗಳೂ ಈ ಪತ್ರಿಕೆಯಲ್ಲಿ ಪ್ರಕಟಿಸಲಾಗುತ್ತದೆ ಹಾಗೂ ತಿಂಗಳ ಮೊದಲ ವಾರದಲ್ಲಿ ಎಲ್ಲಾ ಸದಸ್ಯರಿಗೂ ತಲುಪಿಸ ಲಾಗುತ್ತದೆ. ದಯವಿಟ್ಟು ಎಲ್ಲಾ ಸದಸ್ಯರೂ ಇದನ್ನೇ ಆಹ್ವಾನ ಪತ್ರಿಕೆಯೆಂದು ಪರಿಗಣಿಸಬೇಕು ಎಂದು ಕೋರಿಕೊಳ್ಳುತ್ತೇವೆ.

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2015-2017
Office of Posting: Bangalore PSO, Bangalore 560026
Price :Annual Subscription Rs. 20/-
Date of Posting : 30-01-2016

## 2016 ಜನವರಿ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗವು ಸತತವಾಗಿ ಕಾರ್ಯನಿರತವಾಗಿರುತ್ತದೆ. ನಮ್ಮಲ್ಲಿರುವ ಅಪಾರ ಸಂಖ್ಯೆಯ ಹಸ್ತಪ್ರತಿಗಳಿಗೆ ಸಂಬಂಧಿಸಿದಂತೆ ಹಲವಾರು ಚಟುವಟಿಕೆಗಳನ್ನು ನಿರಂತರವಾಗಿ ನಡೆಸಿಕೊಂಡು ಬರಲಾಗುತ್ತಿದೆ. 2016ರ ಜನವರಿ ತಿಂಗಳಿನಲ್ಲಿ 10 ಗ್ರಂಥಗಳ ಶುಷ್ಕ ಶುದ್ಧೀಕರಣ, 15 ಗ್ರಂಥಗಳಿಗೆ ಮಸಿ ಲೇಪನ, 25 ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಮತ್ತು ಸ್ಕಾನ್ ಮಾಡಲು ಸಿದ್ಧಪಡಿಸಿರುವುದು, 12 ಗ್ರಂಥಗಳಿಗೆ ಸೂಚಿಗಳನ್ನು ತಯಾರಿಸಿರುವುದು, 21 ಗ್ರಂಥಗಳಿಗೆ ಅಟ್ಟೆಕಟ್ಟಿರುವುದು ಮತ್ತು 28 ಗ್ರಂಥಗಳಿಗೆ ಬಟ್ಟೆ ಕಟ್ಟಿರುವ ಕೆಲಸಗಳನ್ನು ಮಾಡಿದೆ.

## ಕೋರಿಕೆ

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. ೨೦/ – ಆಗಿದ್ದು ಐದು ವರ್ಷಗಳ ಚಂದಾ ಹಣ ರೂ, ೧೦೦/– ಮಾತ್ರ.

ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 ‘C’ Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

*ಶ್ರೀಮತಿ/ಶ್ರೀ*..................................................................................

..........................................................................................

..........................................................................................

*ವಿಳಾಸ*
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭